**ಕರ್ನಾಟಕ ವಿಧಾನ ಪರಿಷತ್ತು**

| | | |
|---|---|---|
| ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **50 (30)** |
| ಸದಸ್ಯರ ಹೆಸರು | : | ಶ್ರೀ. ಪ್ರಕಾಶ್ ಕೆ. ರಾಥೋಡ್ (ನಾಮನಿರ್ದೇಶನ ಹೊಂದಿದವರು) |
| ಉತ್ತರಿಸಬೇಕಾದ ದಿನಾಂಕ | : | 07.12.2020 |
| ಉತ್ತರಿಸುವ ಸಚಿವರು | : | ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಸರ್ಕಾರಿ ಮತ್ತು ಅರೆ ಸರ್ಕಾರಿ ಶಿಕ್ಷಣ ಸಂಸ್ಥೆಗಳಲ್ಲಿ ಬೋಧಕರ ಹುದ್ದೆಗಳನ್ನು ಖಾಲಿ ಆದ ದಿನದಿಂದಲೇ ಭರ್ತಿ ಮಾಡಿಕೊಳ್ಳಲಾಗಿದೆಯೇ; (ವಿವರ ನೀಡುವುದು) | ಇಲ್ಲ<br><br>ಪ್ರಸ್ತುತ ಕೋವಿಡ್-19ರ ಹಿನ್ನೆಲೆಯಲ್ಲಿ ಆರ್ಥಿಕ ಇಲಾಖೆಯಿಂದ ಹೊರಡಿಸಲಾಗಿರುವ ಸುತ್ತೋಲೆ ಸಂಖ್ಯೆ: ಆಇ 157 ವೆಚ್ಚ-8/2020, ದಿನಾಂಕ:10/06/2020ರಲ್ಲಿ ಆರ್ಥಿಕ ಮಿತವ್ಯಯ ಸಾಧಿಸುವ ಸಲುವಾಗಿ ಈ ಕೆಳಕಂಡಂತೆ ಕ್ರಮಕೈಗೊಳ್ಳಲು ಸೂಚಿಸಲಾಗಿರುತ್ತದೆ.<br>• 2020-21ನೇ ಸಾಲಿನಲ್ಲಿ ಯಾವುದೇ ಹೊಸ ಅನುದಾನರಹಿತ ವಿದ್ಯಾ ಸಂಸ್ಥೆಗಳನ್ನು ವೇತನಾನುದಾನಕ್ಕೊಳಪಡಿಸುವಂತಿಲ್ಲ.<br>• ಅನುದಾನಿತ ಸಂಸ್ಥೆಗಳಲ್ಲಿ ನಿವೃತ್ತಿ, ನಿಧನ, ರಾಜೀನಾಮೆ ಇತರೆ ಯಾವುದೇ ಕಾರಣಗಳಿಂದ ಖಾಲಿ ಉಂಟಾಗುವ ಹುದ್ದೆಗಳನ್ನು 2020-21ನೇ ಸಾಲಿನಲ್ಲಿ ಭರ್ತಿ ಮಾಡುವಂತಿಲ್ಲ. ಸದರಿ ನಿಯಮವು ಈಗಾಗಲೇ ಭರ್ತಿ ಮಾಡಲು ಆರ್ಥಿಕ ಇಲಾಖೆಯು ಸಹಮತಿಸಿರುವ ಪ್ರಕರಣಗಳಿಗೂ ಸಹ ಅನ್ವಯಿಸತಕ್ಕದ್ದು.<br>• ಅನುದಾನಿತ ಸಂಸ್ಥೆಗಳಲ್ಲಿ ಖಾಲಿ ಉಂಟಾಗುವ ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳಲು ಹೊಸದಾಗಿ ಸಹಮತಿ ನೀಡುವಂತಿಲ್ಲ.<br>• ಈ ಎಲ್ಲಾ ನಿಯಮಗಳು ಸರ್ಕಾರದ ಎಲ್ಲಾ ಇಲಾಖೆಗಳಡಿಯಲ್ಲಿ ಬರುವ ಅನುದಾನಿತ ಶಿಕ್ಷಣ ಸಂಸ್ಥೆಗಳಿಗೆ/ವಸತಿ ನಿಲಯಗಳಿಗೆ ಹಾಗೂ ಈಗಾಗಲೇ ವೇತನಾನುದಾನಕ್ಕೊಳಪಡಿಸಲು ಸ್ವೀಕೃತಗೊಂಡಿರುವ ಮತ್ತು ಸ್ವೀಕೃತಗೊಳ್ಳುವ ಅನುದಾನಿತ ಶಿಕ್ಷಣ ಸಂಸ್ಥೆಗಳು ಸೇರಿದಂತೆ, ಇನ್ನುಳಿದ ಅನುದಾನಿತ ಸಂಸ್ಥೆಗಳಿಗೂ ಸಹ ಅನ್ವಯಿಸತಕ್ಕದ್ದು.<br><br>ಮೇಲ್ಕಂಡಂತೆ ಆರ್ಥಿಕ ಇಲಾಖೆಯು ನಿರ್ದೇಶನ ನೀಡಿರುವುದರಿಂದ ಯಾವುದೇ ಬೋಧಕ ಹಾಗೂ ಬೋಧಕೇತರ ಹುದ್ದೆಗಳನ್ನು ವೇತನಾನುದಾನಕ್ಕೊಳಪಡಿಸಲು ಸಾಧ್ಯವಾಗುತ್ತಿಲ್ಲ. ಪ್ರಸ್ತಾಪಿತ ಆರ್ಥಿಕ ಮಿತವ್ಯಯ ಆದೇಶವನ್ನು ಸಡಿಲಿಸಿದ ನಂತರ ಖಾಲಿಯಿರುವ ಅರ್ಹ ಹುದ್ದೆಗಳನ್ನು ವೇತನಾನುದಾನಕ್ಕೊಳಪಡಿಸಲು ಪರಿಶೀಲಿಸಲಾಗುವುದು.<br><br>ಬಡ್ತಿಗೆ ಸಂಬಂಧಿಸಿದಂತೆ, ಬೋಧಕ ಮತ್ತು ಬೋಧಕೇತರ ವೃಂದದ ಹುದ್ದೆಗಳನ್ನು ಕೌನ್ಸಿಲಿಂಗ್ ಮೂಲಕ ಸ್ಥಳ ನಿಯುಕ್ತಿಗೊಳಿಸಲಾಗುತ್ತಿದೆ.<br><br>ರಾಜ್ಯ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢಶಾಲೆಗಳ ವಿದ್ಯಾರ್ಥಿಗಳ ಶೈಕ್ಷಣಿಕ ಹಿತದೃಷ್ಟಿಯಿಂದ ಕಾಲಕಾಲಕ್ಕೆ ಅರ್ಹ ಅತಿಥಿ ಶಿಕ್ಷಕರನ್ನು ತಾತ್ಕಲಿಕವಾಗಿ ನೇಮಕಾತಿ ಮಾಡಿಕೊಂಡು ಬೋಧನೆ ಮಾಡಿಸುವ ಮೂಲಕ ವಿದ್ಯಾರ್ಥಿಗಳ ಕಲಿಕೆಗೆ ಯಾವುದೇ ವ್ಯತಿರಿಕ್ತ ಪರಿಣಾಮ ಉಂಟಾಗದಂತೆ ಕ್ರಮವಹಿಸಲಾಗುತ್ತಿದೆ.<br><br>ಖಾಲಿ ಹುದ್ದೆಗಳನ್ನು ನೇಮಕಾತಿ ಮತ್ತು ವರ್ಗಾವಣೆ ಮೂಲಕ ಭರ್ತಿ ಮಾಡಬೇಕಾಗುತ್ತದೆ ಆದ್ದರಿಂದ ವಿದ್ಯಾರ್ಥಿಗಳ ಶೈಕ್ಷಣಿಕ ನೇಮಕ ಮಾಡಿಕೊಳ್ಳಲಾಗುತ್ತದೆ ಹಾಗ ಹತ್ತಿರದ ಶಾಲೆಗಳಿಂದ ಕಾರ್ಯಭಾರ ಕಡಿಮೆ |
| ಆ | ಖಾಲಿ ಆದ ದಿನದಿಂದಲೇ ಹುದ್ದೆಗಳನ್ನು ತುಂಬಿಕೊಳ್ಳದಿದ್ದಲ್ಲಿ ಮಕ್ಕಳ ಶಿಕ್ಷಣದಮಟ್ಟ ಕುಗ್ಗಿ ಹೋಗುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ಬಗ್ಗೆ ಸರ್ಕಾರ ಕೈಗೊಳ್ಳುವ ಕ್ರಮವೇನು; ಖಾಲಿ ಹುದ್ದೆಗಳನ್ನು ತುಂಬಲು ಎಷ್ಟು ಕಾಲವಕಾಶ ಬೇಕಾಗುತ್ತದೆ? (ವಿವರ ನೀಡುವುದು) | |

| | | |
|---|---|---|
| | | ಇರುವ ಶಿಕ್ಷಕರನ್ನು ನಿಯೋಜನೆ ಮಾಡಿಕೊಳ್ಳಲಾಗುತ್ತದೆ.<br>ಕಾರ್ಯ ನಿರ್ವಹಿಸುತ್ತಿರುವ ಶಿಕ್ಷಕರು ಶೈಕ್ಷಣಿಕ ವರ್ಷದ ಮಧ್ಯದಲ್ಲಿ ನಿವೃತ್ತರಾದರೆ, ಶೈಕ್ಷಣಿಕ ವರ್ಷದ ಅಂತ್ಯದವರೆಗೆ ಸೇವೆಯಲ್ಲಿ ಮುಂದುವರಿಸಲು ಅವಕಾಶ ಕಲ್ಪಿಸಲಾಗಿದೆ.<br>ಪ್ರಸ್ತುತ ಜಾರಿಯಲ್ಲಿರುವ ಆರ್ಥಿಕ ನಿರ್ಬಂಧ ಸಡಿಲಗೊಂಡ ನಂತರ ಖಾಲಿ ಹುದ್ದೆಗಳನ್ನು ನಿಯಮಾನುಸಾರ ತುಂಬಲು ಕ್ರಮವಹಿಸಲಾಗುತ್ತಿದೆ. |

ಸಂಖ್ಯೆ: ಇಪಿ 87 ಎಲ್‌ಬಿಪಿ 2020

S. Su

(ಎಸ್. ಸುರೇಶ್ ಕುಮಾರ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ
ಸಕಾಲ ಸಚಿವರು